| | |
|---|---|
| 1 | ಕಿಟಕಿ ಬಾಗಿಲಿನ ಲೋಹಗಳಿಗೆ ಆಯಿಲ್ ಹಾಕತಕ್ಕದ್ದು. |
| 2 | ಆಸ್ಪತ್ರೆಯ ಫ್ಯಾನ್ ರೆಕ್ಕೆಗಳನ್ನು ತಿಂಗಳಲ್ಲಿ ಎರಡು ಬಾರಿ ಶುಚಿ ಮಾಡತಕ್ಕದ್ದು. |
| 3 | ಆಸ್ಪತ್ರೆಯಲ್ಲಿ ಕೆಟ್ಟುಹೋದ ಬಲ್ಬ್ ಬದಲಿಗೆ ಹೊಸ ಬಲ್ಬ್ ಹಾಕುವುದು ಮತ್ತು ಸಣ್ಣಪುಟ್ಟ ವಿದ್ಯುತ್ ರಿಪೇರಿಗಳನ್ನು ಮಾಡುವುದು |
| 4 | ಆಸ್ಪತ್ರೆಯ ಆವರಣದಲ್ಲಿ ತೋಟಗಾರಿಕೆ ಇಲಾಖೆಯ ಸಹಕಾರದಿಂದ ಉದ್ಯಾನವನ್ನು ಸ್ಥಾಪಿಸಿ ಅದರ ಉಸ್ತುವಾರಿಯನ್ನು ನೋಡಿಕೊಳ್ಳತಕ್ಕದ್ದು. |
| 5 | ಆಸ್ಪತ್ರೆಯಲ್ಲಿ ಪ್ರತಿ ವರ್ಷ, ಮಂಚ ಮತ್ತು ಲಾಕರ್ ಇತರೆ ವಸ್ತುಗಳಿಗೆ ಬಣ್ಣ ಹಚ್ಚುವುದು ಮತ್ತು ಟ್ಯೂಬ್‌ಗಳು ಹಾಳಾಗಿದ್ದಲ್ಲಿ ಹೊಸ ಟ್ಯೂಬ್ ಗಳನ್ನು ಅಳವಡಿಸುವುದು. |
| 6 | ಸ್ಯಾನಿಟರಿ ಪೈಪ್ ಗಳು ಕಟ್ಟಿಕೊಂಡರೆ ಅವುಗಳನ್ನು ಸರಿಪಡಿಸುವುದು ಮತ್ತು ದುರಸ್ತಿ ಮಾಡುವುದು. |
| 7 | ಆಸ್ಪತ್ರೆಯಲ್ಲಿ ಉಪಯೋಗಿಸುವ ಬಟ್ಟೆಗಳನ್ನು ಸ್ವಚ್ಛಗೊಳಿಸುವುದು. |
| 8 | ಆಸ್ಪತ್ರೆಯ ಗೋಡೆಗಳ ಮೇಲೆ ಸಾರ್ವಜನಿಕರು ಪ್ರಚಾರ ಚೀಟಿಗಳನ್ನು ಅಂಟಿಸದಂತೆ ನೋಡಿಕೊಳ್ಳುವುದು. |
| 9 | ಆಸ್ಪತ್ರೆಯಲ್ಲಿ ನೀರಿನ ಸರಬರಾಜು ನಿರ್ವಹಣೆ ಮತ್ತು ನಲ್ಲಿ ರಿಪೇರಿ ಮತ್ತು ಅವಶ್ಯಕತೆ ಇದ್ದಲ್ಲಿ ಹೊಸ ನಲ್ಲಿಗಳನ್ನು ಅಳವಡಿಸುವುದು. |
| 10 | ಆಸ್ಪತ್ರೆಯಲ್ಲಿ ಅಗ್ನಿಶಾಮಕ ವಸ್ತುಗಳನ್ನು ಅವಶ್ಯಕತೆ ಇದ್ದ ಕಡೆ ಇಡುವುದು. |

ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ.

<u>ಸರ್ಕಾರದ ಆದೇಶ ಸಂಖ್ಯೆ : ಆಕುಕ 368 ಸಿಜಿಎಂ 04 ಬೆಂಗಳೂರು, ದಿನಾಂಕ: 04-08-2004.</u>

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ ರಾಜ್ಯದ ಆಸ್ಪತ್ರೆಗಳಲ್ಲಿ ನಾನ್ ಕ್ಲಿನಿಕಲ್ ಸೌಲಭ್ಯವನ್ನು ಕೆಳಕಂಡ ಮಾರ್ಪಾಡಿನೊಂದಿಗೆ ಜಾರಿಗೆ ತರಲು ಆದೇಶಿಸಿದೆ.

ಆಯಾ ಜಿಲ್ಲೆಗಳಲ್ಲಿ ರಾಜ್ಯ ವಲಯದ ಮತ್ತು ಜಿಲ್ಲಾ ಪಂಚಾಯತ್ ವಲಯದ ಎಲ್ಲಾ ಆಸ್ಪತ್ರೆಗಳಲ್ಲಿ ಶೇಕಡ 30 ರಷ್ಟು ಗ್ರೂಪ್ ಡಿ ಹುದ್ದೆಗಳನ್ನು ಖಾಲಿ ಇಟ್ಟು ವೇತನ ಮತ್ತು ತುಟ್ಟಿ ಭತ್ಯೆವನ್ನು ಲೆಕ್ಕ ಹಾಕಿ ಒಂದು ಜಿಲ್ಲೆಗೆ ರಾಜ್ಯವಲಯ ಮತ್ತು ಜಿಲ್ಲಾ ಪಂಚಾಯತ್ ವಲಯದ ಆಸ್ಪತ್ರೆಗಳಿಗೆ ಪ್ರತ್ಯೇಕವಾಗಿ ಟೆಂಡರ್ ಕರೆಯುವುದು.

ಟೆಂಡರ್ ವಿಧಾನವು ಡಿಸೆಂಬರ್ ತಿಂಗಳಲ್ಲಿ ಪ್ರಾರಂಭಿಸಿ ಮಾರ್ಚ್-31 ಕ್ಕೆ ಮುಕ್ತಾಯಗೊಳಿಸಿ ಏಪ್ರೀಲ್ ತಿಂಗಳಲ್ಲಿ ಕಾರ್ಯಾದೇಶವು ನೀಡುವಂತೆ ಇರತಕ್ಕದ್ದು ಟೆಂಡರ್ ಅವಧಿಯು 1 ವರ್ಷ ಆಗಿರತಕ್ಕದ್ದು.

ಟೆಂಡರ್ ಕರೆಯುವಾಗ ಇ.ಎಂ.ಡಿ. ಹಣ ಟೆಂಡರ್ ಹಣದ ಶೇಕಡ 20 ರಷ್ಟು ಹಣವನ್ನು ಪಡೆಯತಕ್ಕದ್ದು ಈ ಹಣವನ್ನು ಟೆಂಡರ್ ಅವಧಿ ಮುಗಿದ ನಂತರ ಹಿಂದಿರುಗಿಸಲಾಗುವುದು.

ಮೂಲ ಕ್ರಮ ಸಂಖ್ಯೆ (4)ರಲ್ಲಿ ಬದಲಾಗಿ ಟೆಂಡರ್ ಕರೆಯುವಾಗ ಎರಡು ಲಕೋಟೆಯಲ್ಲಿ ಕರೆದು 1 ನೇ ಲಕೋಟೆಯಲ್ಲಿ ದಾಖಲೆಗಳನ್ನು 2ನೇ ಲಕೋಟೆಯಲ್ಲಿ ದರಪಟ್ಟಿಯನ್ನು ಹೊಂದಿರಬೇಕು. 1ನೇ ಲಕೋಟೆಯಲ್ಲಿ ಈ ಕೆಳಗಿನ ದೃಢೀಕೃತ ದಾಖಲೆಗಳನ್ನು ಹೊಂದಿರಬೇಕಾಗುತ್ತದೆ.

1. ಕರ್ನಾಟಕ ತೆರಿಗೆ ಇಲಾಖೆಯ ನೊಂದಣಿ ಪತ್ರ.
2. ವೃತ್ತಿ ತೆರಿಗೆ ಇಲಾಖೆಯ ನೊಂದಣಿ ಪತ್ರ.
3. ಕಾರ್ಮಿಕ ಇಲಾಖೆಯಲ್ಲಿ 2 ವರ್ಷದ ಹಿಂದೆಯೇ ಹೊಂದಿದ ನೊಂದಣಿ ಪತ್ರ.
4. ಪ್ರಾವಿಡೆಂಟ್ ಫಂಡ್ ಇಲಾಖೆಯ ನೊಂದಣಿ ಪತ್ರ.
5. ಸೇವಾ ತೆರಿಗೆ ಇಲಾಖೆಯ ನೊಂದಣಿ ಪತ್ರ (ಸರ್ವೀಸ್ ಟ್ಯಾಕ್ಸ್).
6. ವರಮಾನ ತೆರಿಗೆ ಇಲಾಖೆಯಲ್ಲಿ ಕಳೆದ 2 ವರ್ಷಗಳಿಂದ ತೆರಿಗೆ ತುಂಬಿದ ಪತ್ರ.
7. ಸರಕಾರಿ ಸೌಮ್ಯದ 100 ಹಾಸಿಗೆ ಹಾಗೂ ಜಿಲ್ಲಾ ಆಸ್ಪತ್ರೆಯಲ್ಲಿ ಕಳೆದ 2 ವರ್ಷಗಳಿಂದ ಕೆಲಸ ಮಾಡಿದ ಅನುಭವ ಪ್ರಮಾಣಪತ್ರ.
8. ಸಂಸ್ಥೆಯ ಕಾರ್ಯಾಲಯದ ವಿಳಾಸ.
9. 20% ಡಿ.ಡಿ. ಇಲಾಖೆಯ ಮುಖ್ಯಸ್ಥರ ಹೆಸರಿನಲ್ಲಿ.
10. ಟೆಂಡರ್ ಫಾರ್ಮ ರಶೀದಿಯ ಝರಾಕ್ಸ್.

1ನೇ ಲಕೋಟೆಯಲ್ಲಿ ಮೇಲ್ಕಿನ 10 ದಾಖಲೆಗಳನ್ನು ಒಳಗೊಂಡಿರಬೇಕು. ಒಂದು ವೇಳೆ ಮೇಲಿನ ದೃಢೀಕೃತ ದಾಖಲೆಗಳು ಇಲ್ಲವಾದಲ್ಲಿ ಟೆಂಡರ್ ದಾರನನ್ನು ತಿರಸ್ಕರಿಸಿ 2ನೇ ಲಕೋಟೆಯ ದರಪಟ್ಟಿಯನ್ನು ತೆರೆಯಬಾರದು. 1ನೇ ಲಕೋಟೆಯಲ್ಲಿ ಮೇಲಿನ ದಾಖಲೆಗಳು ಸರಿಯಾಗಿದ್ದರ ಮಾತ್ರ 2ನೇ ಲಕೋಟೆಯ ದರಪಟ್ಟಿಯನ್ನು ತೆರೆಯಬೇಕು. ಕರ್ನಾಟಕ ಪಾರದರ್ಶಕ ಅಧಿನಿಯಮದಡಿಯಲ್ಲಿ ಪಾರದರ್ಶಕತೆಯಿಂದ ಸಾರ್ವಜನಿಕರಿಗೆ ತೊಂದರೆಯಾಗದಂತೆ ಟೆಂಡರ್ ನಿಯಮಗಳನ್ನು ಪಾಲಿಸಬೇಕು. ಇದನ್ನು ಹೊರತುಪಡಿಸಿ ಟೆಂಡರ್ ಕರೆದಲ್ಲಿ ಇಲಾಖೆಯ ಮುಖ್ಯಸ್ಥರೇ ಜವಾಬ್ದಾರರಾಗುತ್ತಾರೆ.

